


# ಕರ್ನಾಟಕ ಇತಿಹಾಸ ಅಕಾದೆಮಿ ಬೆಂಗಳೂರು

## ನಿಬಂಧನೆಗಳು

1. ಸಂಸ್ಥೆಯ ಹೆಸರು : 'ಕರ್ನಾಟಕ ಇತಿಹಾಸ ಅಕಾದೆಮಿ' ಎಂದಿರುತ್ತದೆ.

2. ಅಕಾದೆಮಿಯ ನೋಂದಾಯಿತ ಕೇಂದ್ರ ಕಛೇರಿಯು—'ಸಂಖ್ಯೆ 13 (ಹಳೆಯ ಸಂಖ್ಯೆ 4), ನೂತನ ದೇವಾಲಯದ ರಸ್ತೆ, 15ನೆಯ ತಿರುವು, ಮಲ್ಲೇಶ್ವರಂ, ಬೆಂಗಳೂರು-560 003
—ಈ ವಿಳಾಸದಲ್ಲಿರುತ್ತದೆ.

3. ಅಕಾದೆಮಿಯ ಧ್ಯೇಯೋದ್ದೇಶಗಳು :

ಅ) ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಗಳ ಸರ್ವಾಂಗೀಣ ಅಧ್ಯಯನ, ಸಂಶೋಧನೆ ಕೈಗೊಳ್ಳುವುದು ಹಾಗೂ ಈ ಕಾರ್ಯದಲ್ಲಿ ನಿರತರಾಗಿರುವ ವ್ಯಕ್ತಿ ಅಥವಾ ಸಂಸ್ಥೆಗಳಿಗೆ ನೆರವು ನೀಡುವುದು.

ಆ) ಈ ಧ್ಯೇಯದ ಸಾಧನೆಗಾಗಿ ಸಭೆ, ಸಮ್ಮೇಳನ, ವಿಚಾರಸಂಕಿರಣ, ಅಭ್ಯಾಸವರ್ಗ, ದತ್ತಿ ಉಪನ್ಯಾಸ ಹಾಗೂ ಸಾಂಸ್ಕೃತಿಕ ಪ್ರವಾಸ ಇವುಗಳನ್ನು ಏರ್ಪಡಿಸುವುದು.

ಇ) ಈ ಧ್ಯೇಯದ ಸಾಧನೆಗಾಗಿ ನಿಯತಕಾಲಿಕೆ ಮತ್ತು ಪುಸ್ತಕಗಳ ಪ್ರಕಟಣೆ ಕೈಗೊಳ್ಳುವುದು.

ಈ) ಇತಿಹಾಸ ಸಂಶೋಧನೆಗೆ ನೆರವಾಗುವ ಭಾಷೆ, ಶಾಸನ, ಮೋಡಿ ಲಿಪಿ ಮತ್ತು ತತ್ಸಂಬಂಧ ಅಧ್ಯಯನ ತರಗತಿಗಳನ್ನು ನಡೆಸುವುದು.

ಉ) ಇತಿಹಾಸ ಅಧ್ಯಯನಕ್ಕೆ ಸಾಧಕವಾಗುವ ಗ್ರಂಥಾಲಯ, ವಸ್ತುಸಂಗ್ರಹಾಲಯಗಳ ಸ್ಥಾಪನೆ ಹಾಗೂ ವಿವಿಧ ಮಾಧ್ಯಮಗಳಲ್ಲಿರುವ ದಾಖಲೆಗಳನ್ನು ಅನ್ವೇಷಿಸುವುದು, ಸಂಗ್ರಹಿಸುವುದು ಮತ್ತು ಸಂರಕ್ಷಿಸುವುದು.

ಊ) ಇತಿಹಾಸ ಅಧ್ಯಯನವನ್ನು ಜನಪ್ರಿಯಗೊಳಿಸುವುದು ಹಾಗೂ ಶಾಸನ, ಸ್ಮಾರಕ, ದಾಖಲೆಗಳು, ಕಲಾಕೃತಿಗಳು ಮತ್ತು ಪ್ರಾಚ್ಯವಸ್ತುಗಳು—ಇವುಗಳ ರಕ್ಷಣೆಗಾಗಿ ಜನರಲ್ಲಿ ಜಾಗೃತಿ ಮೂಡಿಸುವುದು.

ಋ) ತನ್ನ ಧ್ಯೇಯೋದ್ದೇಶಗಳಿಗನುಗುಣವಾಗಿ ಇತರ ಕಾರ್ಯಗಳನ್ನು ಕೈಗೊಳ್ಳುವುದು.

4. ಅ) ಅಕಾದೆಮಿಯ ಕಾರ್ಯನಿರ್ವಹಣೆಯನ್ನು ಕಾರ್ಯಕಾರಿ ಸಮಿತಿಯು ನಿರ್ವಹಿಸುತ್ತದೆ. ಕಾರ್ಯಕಾರಿ ಸಮಿತಿಯಲ್ಲಿ ಅಕಾದೆಮಿಯ ಸರ್ವಸದಸ್ಯರ ಮಹಾಸಭೆಯಲ್ಲಿ ಚುನಾಯಿತರಾದ ಇಪ್ಪತ್ತು ಮಂದಿ ಸದಸ್ಯರಿರುತ್ತಾರೆ. ಕರ್ನಾಟಕ ರಾಜ್ಯದ ಪ್ರತೀ ಕಂದಾಯ (ರೆವಿನ್ಯೂ) ವಿಭಾಗದಿಂದ ಕನಿಷ್ಠ ಇಬ್ಬರು ಸದಸ್ಯರು ಇರಬೇಕು. ಕಾರ್ಯಕಾರಿ ಸಮಿತಿಯ ಆಡಳಿತಾವಧಿಯು ಎರಡು ವರ್ಷಗಳಿದ್ದು, ಒಮ್ಮೆ ಇದ್ದ ಸದಸ್ಯರ ಮರುಚುನಾವಣೆಗೆ ಅವಕಾಶವಿರುತ್ತದೆ.

ಆ) ಕಾರ್ಯಕಾರಿ ಸಮಿತಿಯು ತನ್ನ ಮೊದಲನೆಯ ಸಭೆಯಲ್ಲಿ, ತಮ್ಮಲ್ಲೇ ಏಳು ಜನ ಪದಾಧಿಕಾರಿಗಳನ್ನು ಚುನಾಯಿಸಿಕೊಳ್ಳುತ್ತದೆ. ಅವರುಗಳೆಂದರೆ : ಕಾರ್ಯಾಧ್ಯಕ್ಷ, ಇಬ್ಬರು ಉಪಾಧ್ಯಕ್ಷರು, ಒಬ್ಬ ಪ್ರಧಾನ ಕಾರ್ಯದರ್ಶಿ, ಇಬ್ಬರು ಕಾರ್ಯದರ್ಶಿಗಳು ಮತ್ತು ಒಬ್ಬ ಕೋಶಾಧಿಕಾರಿ.

ಇ) ಕಾರ್ಯಕಾರಿ ಸಮಿತಿಯಲ್ಲಿ ಸ್ಥಾನ/ಸ್ಥಾನಗಳು ತೆರವಾದಾಗ, ಆ ಜಾಗಗಳಿಗೆ ಸದಸ್ಯರಲ್ಲಿಯೇ ಆಯ್ಕೆಮಾಡಿ ನೇಮಕ/ನಾಮಕರಣದ ಮೂಲಕ ತುಂಬುವ ಅಧಿಕಾರವು ಕಾರ್ಯಕಾರಿ ಸಮಿತಿಗೆ ಇರುತ್ತದೆ.

ಈ) ಅವಶ್ಯ ಕಂಡರೆ ಮೂವರು ಸದಸ್ಯರನ್ನು ಕಾರ್ಯಕಾರಿ ಸಮಿತಿಗೆ ನಾಮಕರಣ ಮಾಡುವ ಅಧಿಕಾರವು ಕಾರ್ಯಕಾರಿ ಸಮಿತಿಗೆ ಇರುತ್ತದೆ.

ಉ) ಅಕಾದೆಮಿಯ ವಾರ್ಷಿಕ ಸಮ್ಮೇಳನಕ್ಕಾಗಿ ಗಣ್ಯ ವಿದ್ವಾಂಸರೊಬ್ಬರನ್ನು ಅಧ್ಯಕ್ಷರಾಗಿ ಆಯ್ಕೆ ಮಾಡತಕ್ಕದ್ದು.

ಊ) ಪ್ರಾದೇಶಿಕ ಇಲ್ಲವೆ ಯಾವುದೇ ಕಾರ್ಯಸಾಧನೆಗಳಿಗಾಗಿ ಸ್ಥಾಯಿ ಸಮಿತಿಗಳನ್ನು ಕಾರ್ಯಕಾರಿ ಸಮಿತಿಯು ನೇಮಕ ಮಾಡಬಹುದು. ಈ ಸ್ಥಾಯಿ ಸಮಿತಿಗಳ ಅವಧಿಯು ಕಾರ್ಯಕಾರಿ ಸಮಿತಿಯ ಅವಧಿಯೊಂದಿಗೆ ಕೊನೆಗೊಳ್ಳುತ್ತದೆ.

5. ಅಕಾದೆಮಿಯ ಕಾರ್ಯನಿರ್ವಹಣೆಗೆ ಅವಶ್ಯವೆನಿಸುವ ನಿಯಮ, ನಿಬಂಧನೆಗಳನ್ನು ಕಾರ್ಯಕಾರಿ ಸಮಿತಿಯು ಸಿದ್ಧಪಡಿಸುತ್ತದೆ. ಅಂತಹ ನಿಯಮ, ನಿಬಂಧನೆಗಳು ಅಕಾದೆಮಿಯ ನೋಂದಾಯಿತವಾಗಿರುವ ಸಹಕಾರಿ ಸಂಸ್ಥೆಗಳ ನೋಂದಾವಣೆಯ ಕಾನೂನು ನಿಯಮಗಳಿಗೆ ಅನುಗುಣವಾಗಿರತಕ್ಕದ್ದು ಮತ್ತು ಸರ್ವಸದಸ್ಯರ ಸಭೆಯಲ್ಲಿ ಅನುಮೋದನೆಯನ್ನು ಪಡೆಯತಕ್ಕದ್ದು.

6. ಅಕಾದೆಮಿಯ ಆಸ್ತಿಪಾಸ್ತಿ ಹಾಗೂ ಹಣದ ವ್ಯವಹಾರಗಳು ಕಾರ್ಯಕಾರಿ ಸಮಿತಿಯ ನಿಯಂತ್ರಣದಲ್ಲಿ ಇರುತ್ತವೆ. ಅಕಾದೆಮಿಯ ಬ್ಯಾಂಕು ವಹಿವಾಟುಗಳು ಕಾರ್ಯಾಧ್ಯಕ್ಷ ಅಥವಾ ಪ್ರಧಾನ ಕಾರ್ಯದರ್ಶಿ ಮತ್ತು ಕೋಶಾಧಿಕಾರಿಗಳಿಂದ ಸಂಯುಕ್ತವಾಗಿ ನಿರ್ವಹಿಸತಕ್ಕದ್ದು.

7. ಅಕಾದೆಮಿಯ ಸುಲಲಿತ ಕಾರ್ಯಾಚರಣೆಗಾಗಿ ವರುಷಕ್ಕೆ ಕನಿಷ್ಠ ಆರು ಬಾರಿ ಕಾರ್ಯಕಾರಿ ಸಮಿತಿಯ ಸಭೆ ಸೇರಬೇಕು.

8. ಕಾರ್ಯಕಾರಿ ಸಮಿತಿಯ ಯಾವುದೇ ಸಭೆಗೆ ಕನಿಷ್ಠ ಆರು ಮಂದಿ ಸದಸ್ಯರ ಕೋರಂ ಇರತಕ್ಕದ್ದು. ಕೋರಂ ಇಲ್ಲದ ಕಾರಣ ಸಭೆಯು ಮುಂದೂಡಲ್ಪಟ್ಟರೆ ಅರ್ಧ ಗಂಟೆಯ ನಂತರ ಮುಂದೂಡಲ್ಪಟ್ಟ ಸಭೆಯಲ್ಲಿ ಕೋರಂ ಇಲ್ಲದಿದ್ದರೂ ಸಭೆಯನ್ನು ನಡೆಸತಕ್ಕದ್ದು. ಇಂತಹ ಸಭೆಯಲ್ಲಿ ಕೈಗೊಂಡ

ನಿರ್ಣಯಗಳು ಊರ್ಜಿತವಾಗುತ್ತವೆ. ನಿರ್ಣಯ ಕೈಗೊಳ್ಳುವಾಗ ಸಮಾನ ಮತಗಳು ಬಂದಲ್ಲಿ ಸಭಾಧ್ಯಕ್ಷರಿಗೆ ಅಧಿಕ ನಿರ್ಣಾಯಕ ಮತ ಚಲಾಯಿಸುವ ಹಕ್ಕು ಇರುತ್ತದೆ.

## 9. ಕಾರ್ಯಕಾರಿ ಸಮಿತಿ ಸದಸ್ಯರ ಕರ್ತವ್ಯಗಳು :

ಅ) ಕಾರ್ಯಾಧ್ಯಕ್ಷರು ಅಕಾದೆಮಿಯ ವ್ಯವಹಾರ, ಕಾರ್ಯಚಟುವಟಿಕೆ ಕುರಿತು ಸಲಹೆ ನೀಡಿ ಮಾರ್ಗದರ್ಶನ ಮಾಡತಕ್ಕದ್ದು. ಪ್ರಧಾನ ಕಾರ್ಯದರ್ಶಿಯು ಅವರಿಗೆ ಅಧೀನರಾಗಿರುತ್ತಾರೆ.

ಆ) ಕಾರ್ಯಾಧ್ಯಕ್ಷರು ಕಾರ್ಯಕಾರಿ ಸಮಿತಿಯ ಸಭೆಗಳ ಅಧ್ಯಕ್ಷತೆ ವಹಿಸಿ ಅಕಾದೆಮಿಯ ವ್ಯವಹಾರಗಳಲ್ಲಿ ಮಾರ್ಗದರ್ಶನ ನೀಡುತ್ತಾರೆ.

ಇ) ಕಾರ್ಯಾಧ್ಯಕ್ಷರ ಗೈರು ಹಾಜರಿಯಲ್ಲಿ ಅವರ ಕಾರ್ಯವನ್ನು ವಯಸ್ಸಿನಲ್ಲಿ ಹಿರಿಯರಾದ ಉಪಾಧ್ಯಕ್ಷರು ನಿರ್ವಹಿಸುತ್ತಾರೆ.

ಈ) ಪ್ರಧಾನ ಕಾರ್ಯದರ್ಶಿಯು ಕಾರ್ಯಕಾರಿ ಸಮಿತಿಯ ಮತ್ತು ಸರ್ವಸದಸ್ಯರ ಮಹಾಸಭೆಯನ್ನು ವ್ಯವಸ್ಥೆ ಮಾಡುವ ಆಯಾ ಸಭೆಗಳ ನಡಾವಳಿಕೆಗಳನ್ನು ದಾಖಲು ಮಾಡುವ, ಸಭೆಗಳಲ್ಲಿ ಸ್ವೀಕೃತವಾದ ತೀರ್ಮಾನಗಳನ್ನು ಅಥವಾ ಒಪ್ಪಿತವಾದ ನಿರ್ಣಯಗಳನ್ನು ಕಾರ್ಯರೂಪಕ್ಕೆ ತರುವ, ಅಕಾದೆಮಿಯ ದಾಖಲೆಗಳನ್ನು ಸಮರ್ಪಕವಾಗಿ ಇಡುವ, ಅಕಾದೆಮಿಯ ಸದಸ್ಯರ ಪಟ್ಟಿಯನ್ನು ಇಡುವ, ಅಕಾದೆಮಿಗೋಸ್ಕರ ಅದರ ಪರವಾಗಿ ವ್ಯವಹರಿಸುವ, ಕಾರ್ಯಕಾರಿ ಸಮಿತಿಗೆ ಮತ್ತು ಕಾರ್ಯಾಧ್ಯಕ್ಷರಿಗೆ ಅಕಾದೆಮಿಯ ಕಾರ್ಯಗಳಿಗೆ ಸಂಬಂಧಿಸಿದಂತೆ ಸಹಕರಿಸುವ ಕಾರ್ಯವನ್ನು ನಿರ್ವಹಿಸುತ್ತಾರೆ. ಕಾರ್ಯದರ್ಶಿಗಳು ಪ್ರಧಾನ ಕಾರ್ಯದರ್ಶಿಗೆ ಅಧೀನರಾಗಿ ಅವರಿಗೆ ನೆರವಾಗುತ್ತಾರೆ.

ಉ) ಕೋಶಾಧಿಕಾರಿಯು ಅಕಾದೆಮಿಗೆ ಬರಬೇಕಾದ ಹಣವನ್ನು ಸಂಗ್ರಹಿಸುವ, ಸ್ವೀಕರಿಸುವ ಹಾಗೂ ಅಕಾದೆಮಿಯು ಪಾವತಿ ಮಾಡಬೇಕಾದ ಹಣವನ್ನು ಪಾವತಿ ಮಾಡುವ ಜವಾಬ್ದಾರಿ ಹೊತ್ತಿರುತ್ತಾರೆ. ಜೊತೆಗೆ ಹಣದ ವಹಿವಾಟಿನ ನಿರ್ವಹಣೆಯನ್ನು ಕೋಶಾಧಿಕಾರಿಯು ಮಾಡತಕ್ಕದ್ದು. ಅಕಾದೆಮಿಯ ಲೆಕ್ಕ ಪತ್ರಗಳನ್ನು ಕೋಶಾಧಿಕಾರಿಯು ಇಡತಕ್ಕದ್ದು ಹಾಗೂ ವಾರ್ಷಿಕವಾಗಿ ಆಡಿಟ್ ಮಾಡಿಸಿಕೊಳ್ಳತಕ್ಕದ್ದು.

ಊ) ಅಧ್ಯಕ್ಷರು ವಾರ್ಷಿಕ ಸಮ್ಮೇಳನದ ಕಾಲಕ್ಕೆ ಸಮ್ಮೇಳನದ ಅಧ್ಯಕ್ಷತೆ ವಹಿಸುವರು. ಅವರು ಅಕಾದೆಮಿಯ ಸದಸ್ಯರಾಗಿರಬೇಕಿಲ್ಲ.

## 10. ಸದಸ್ಯತ್ವ :

ಅಕಾದೆಮಿಯ ಧ್ಯೇಯೋದ್ದೇಶಗಳನ್ನು ಒಪ್ಪುವ, ಹದಿನೆಂಟು ವರುಷಗಳ ವಯಸ್ಸು ದಾಟಿದ ವ್ಯಕ್ತಿಗಳು ಸಾಮಾನ್ಯ ಸದಸ್ಯರಾಗಲು ಅರ್ಹರಾಗಿರುತ್ತಾರೆ. ಸದಸ್ಯತ್ವದ ಅರ್ಜಿಯನ್ನು ಅಕಾದೆಮಿಯ ಯಾರಾದರೊಬ್ಬ ಸದಸ್ಯರು ದೃಢೀಕರಿಸಬೇಕಾಗುತ್ತದೆ. ಸದಸ್ಯತ್ವಕ್ಕೆ ಒಪ್ಪಿಗೆಯನ್ನು ಕಾರ್ಯಕಾರಿ ಸಮಿತಿಯು ನೀಡಬೇಕು. ಸಾಮಾನ್ಯ ಸದಸ್ಯತ್ವದ ವಾರ್ಷಿಕ ಶುಲ್ಕವು ರೂ. 25-00 (ಇಪ್ಪತ್ತೈದು) ಆಗಿರುತ್ತದೆ. ಆಜೀವ ಸದಸ್ಯತ್ವದ ಶುಲ್ಕ ರೂ. 200-00 (ಎರಡು ನೂರು) ಆಗಿರುತ್ತದೆ. ಒಂದು ವರುಷದ

ಅವಧಿಯಲ್ಲಿ ಆಜೀವ ಸದಸ್ಯತ್ವದ ಶುಲ್ಕವನ್ನು ಪಾವತಿ ಮಾಡತಕ್ಕದ್ದು. ರೂ. 1000-00 (ಒಂದು ಸಾವಿರ) ಮತ್ತು ಮೇಲ್ಪಟ್ಟು ಒಂದೇ ಕಂತಿನಲ್ಲಿ ಕಾಣಿಕೆ ಕೊಡುವ ವ್ಯಕ್ತಿಗಳು ಪೋಷಕರಾಗಿರುವರು. ಅವರಿಗೆ ಆಜೀವ ಸದಸ್ಯರ ಹಕ್ಕುಗಳಿರುತ್ತವೆ.

11. ಸಾಮಾನ್ಯ ಸದಸ್ಯರು ಪ್ರತೀ ವರುಷದ ಮಾರ್ಚ್ ತಿಂಗಳ ಕೊನೆಯ ದಿನಕ್ಕೆ ಮೊದಲು ಆಯಾ ವರುಷದ ತಮ್ಮ ಸದಸ್ಯತ್ವದ ಚಂದಾ ಹಣವನ್ನು ಮುಂಗಡವಾಗಿ ಸಂದಾಯ ಮಾಡತಕ್ಕದ್ದು. ಅಕಾದೆಮಿಯ ಲೆಕ್ಕಪತ್ರ ವರುಷವು ಪ್ರತೀ ವರುಷದ ಜನವರಿ 1ರಂದು ಆರಂಭವಾಗಿ ಡಿಸೆಂಬರ್ 31ಕ್ಕೆ ಮುಗಿಯುತ್ತದೆ. ಸದಸ್ಯತ್ವದ ಚಂದಾ ಹಣವನ್ನು 'ಕೋಶಾಧಿಕಾರಿ, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು' ಇವರ ಹೆಸರಿಗೆ ನಗದು, ಚೆಕ್, ಡಿಮ್ಯಾಂಡ್ ಡ್ರಾಫ್ಟ್, ಮನಿ ಆರ್ಡರ್ ಅಥವಾ ಪೋಸ್ಟಲ್ ಆರ್ಡರ್ ಮೂಲಕ ಪಾವತಿ ಮಾಡಬಹುದು. ಚೆಕ್, ಡ್ರಾಫ್ಟ್ ಮತ್ತು ಪೋಸ್ಟಲ್ ಆರ್ಡರ್‌ಗಳನ್ನು ನಗದುಗೊಳಿಸಿಕೊಳ್ಳಲು ತಗಲುವ ವೆಚ್ಚವನ್ನೂ ಚೆಕ್ ಮತ್ತು ಪೋಸ್ಟಲ್ ಆರ್ಡರ್‌ಗಳಲ್ಲಿ ಸೇರಿಸಿ ಕೊಡಬೇಕು.

12. ಆಯಾ ವರುಷದ ಏಪ್ರಿಲ್ 1ನೆಯ ದಿನಾಂಕದೊಳಗೆ ಚಂದಾ ಹಣವನ್ನು ಪಾವತಿ ಮಾಡಿ ಸದಸ್ಯತ್ವವನ್ನು ನವೀಕರಣಗೊಳಿಸದಿದ್ದರೆ ಅಂತಹವರ ಸದಸ್ಯತ್ವವು ಅಕಾದೆಮಿಯಿಂದ ರದ್ದಾಗುತ್ತದೆ.

13. ಕಾರ್ಯಕಾರಿ ಸಮಿತಿಯು ಅಕಾದೆಮಿಯ ಚಟುವಟಿಕೆ ಮತ್ತು ಧ್ಯೇಯೋದ್ದೇಶಗಳಿಗೆ ಕುಂದು ತಂದಿರುವ ಅಥವಾ ತರಬಲ್ಲ ಯಾವುದೇ ಸದಸ್ಯನ ಸದಸ್ಯತ್ವವನ್ನು ರದ್ದುಮಾಡಬಹುದು. ಈ ನಿರ್ಣಯಕ್ಕೆ ಕಾರ್ಯಕಾರಿ ಸಮಿತಿಯ ಮೂರನೆಯ ಎರಡುಭಾಗ ಸದಸ್ಯರ ಸಮ್ಮತಿ ಇರತಕ್ಕದ್ದು.

14. ಅಕಾದೆಮಿಯ ಸದಸ್ಯತ್ವಕ್ಕೆ ಅಂಗೀಕಾರ ಪಡೆಯದ ವ್ಯಕ್ತಿ ಅಥವಾ ಸಂಸ್ಥೆಗಳು ಅಕಾದೆಮಿಯ ನಿಯತ ಕಾಲಿಕಕ್ಕೆ ಚಂದಾದಾರರಾಗಬಹುದು. ಈ ಚಂದಾ ದರವನ್ನು ಕಾರ್ಯಕಾರಿ ಸಮಿತಿಯು ನಿರ್ಧರಿಸುವುದು.

15. ಸದಸ್ಯರಿಗೆ ಸೌಲಭ್ಯಗಳು :

ಅ) ಸದಸ್ಯರಿಗೆ ಪ್ರತೀ ತಿಂಗಳ ಉಪನ್ಯಾಸ ಕಾರ್ಯಕ್ರಮವನ್ನು ತಿಳಿಸಲಾಗುವುದು.

ಆ) ಸದಸ್ಯರು ಉಪನ್ಯಾಸಗಳಿಗೆ ತಮ್ಮ ಸ್ನೇಹಿತರನ್ನೂ ಕರೆತರಬಹುದು. ವಿಶೇಷ ಸಂದರ್ಭಗಳಲ್ಲಿ, ಕಾರ್ಯಾಧ್ಯಕ್ಷರು ಯಾರಿಗಾದರೂ ಸಭೆಗೆ ಬರದಂತೆ ನಿಷೇಧಿಸುವ ಅಧಿಕಾರ ಹೊಂದಿರುತ್ತಾರೆ.

ಇ) ಸದಸ್ಯರು ಅಕಾದೆಮಿಯ ವಾರ್ಷಿಕ ಮಹಾಧಿವೇಶನದಲ್ಲಿ ಮತ ಚಲಾಯಿಸುವ ಹಾಗೂ ಚುನಾವಣೆಗೆ ಸ್ಪರ್ಧಿಸುವ ಹಕ್ಕನ್ನು ಪಡೆದಿರುತ್ತಾರೆ. ಬದಲಿ ಮತ ಚಲಾವಣೆಗೆ ಅವಕಾಶ ಇರುವುದಿಲ್ಲ.

ಈ) ಸದಸ್ಯರಿಗೆ ಅಕಾದೆಮಿಯ ನಿಯತಕಾಲಿಕೆಯ ಒಂದು ಪ್ರತಿಯನ್ನು ಉಚಿತವಾಗಿ ನೀಡಲಾಗುತ್ತದೆ. ನಿಯತಕಾಲಿಕೆಯ ಹೆಚ್ಚು ಪ್ರತಿಗಳು ಅಥವಾ ಹಿಂದಿನ ಪ್ರತಿಗಳು ಅವಶ್ಯಕವಾದರೆ ನಿಗದಿತ ಬೆಲೆಯನ್ನು ಪಾವತಿ ಮಾಡಿ ಕೊಳ್ಳಬೇಕಾಗುತ್ತದೆ. ಅಕಾದೆಮಿಯ ನಿಯತಕಾಲಿಕೆಯ ಅಥವಾ ಮತ್ತಾವುದೇ ಪ್ರಕಟಣೆಯ ಮುಖಬೆಲೆಯ ಶೇಕಡ $33\frac{1}{3}$ರಷ್ಟು ಸೋಡಿಗೆ ಸದಸ್ಯರು ಅರ್ಹರಾಗಿರುತ್ತಾರೆ.

16. ಲೆಕ್ಕ ಪತ್ರದ ವರ್ಷದ ಅವಧಿ ಮುಗಿದ ಆರು ತಿಂಗಳ ಒಳಗೆ ಅಕಾದೆಮಿಯ ಸರ್ವಸದಸ್ಯರ ವಾರ್ಷಿಕ ಮಹಾಸಭೆಯನ್ನು ನಡೆಸತಕ್ಕದ್ದು. ಆ ಮಹಾಸಭೆಯಲ್ಲಿ ಸಭೆಯ ಒಪ್ಪಿಗೆಗಾಗಿ ಕಳೆದ ವರ್ಷದ ಅಕಾದೆಮಿಯ ಕಾರ್ಯನಿರ್ವಹಣೆಯ ವರದಿ, ಲೆಕ್ಕ ಪತ್ರಗಳ ತನಿಖೆಯ ವರದಿ ಮತ್ತು ಮುಂಬರುವ ವರುಷದ ಆಯ–ವ್ಯಯ ವರದಿಯನ್ನು ಮಂಡಿಸತಕ್ಕದ್ದು.

50

17. ಸರ್ವಸದಸ್ಯರ ವಾರ್ಷಿಕ ಮಹಾಸಭೆಗೆ 15 ಮಂದಿ ಸದಸ್ಯರ ಕೋರಂ ಇರಬೇಕು. ಮಹಾಸಭೆಯ ದಿನಾಂಕಕ್ಕೆ ಕನಿಷ್ಠ 15 ದಿವಸ ಮೊದಲು, ಅಕಾದೆಮಿಯ ಪ್ರತಿಯೊಬ್ಬ ಸದಸ್ಯನಿಗೂ ಮಹಾಸಭೆಯ ತಿಳಿವಳಿಕೆಯ ಪತ್ರವನ್ನು ಕಳುಹಿಸಬೇಕು. ಸರ್ವಸದಸ್ಯರ ವಾರ್ಷಿಕ ಮಹಾಸಭೆಯಲ್ಲಿ ಮುಂದಿನ ವರುಷದ ಲೆಕ್ಕ ತನಿಖಾಧಿಕಾರಿಗಳನ್ನೂ ನೇಮಿಸತಕ್ಕದ್ದು.

18. 1960ನೆಯ ವರುಷದ ಕರ್ನಾಟಕ ಸಹಕಾರೀ ಸಂಸ್ಥೆಗಳ ನೋಂದಾವಣೆ ಕಾಯಿದೆಯ ವಿಭಾಗ 22ರಲ್ಲಿ ಸೂಚಿತವಾಗಿರುವುದಕ್ಕೆ ಅನುಗುಣವಾಗಿ ಅಕಾದೆಮಿಯನ್ನು ರದ್ದು ಪಡಿಸುವಂತಹ ಸಂದರ್ಭಗಳಲ್ಲಿ, ರದ್ದು ಮಾಡುವ ದಿನದಂದು ಅಕಾದೆಮಿಗೆ ಸೇರಿದ ಉಳಿದಿರುವ ಯಾವುದೇ ಸ್ವತ್ತನ್ನು ಕಾರ್ಯಕಾರಿ ಸಮಿತಿ ಸದಸ್ಯರಿಗೆ ಹಂಚುವಂತಿಲ್ಲ ; ಬದಲಿಗೆ 1961ರ ಆದಾಯ ತೆರಿಗೆ ಕಾಯಿದೆಯ ವಿಭಾಗ 80 'ಬಿ'ಯ ಅಂಗೀಕಾರದ ಸೌಲಭ್ಯ ಪಡೆದ, ಅಕಾದೆಮಿಯ ಧ್ಯೇಯೋದ್ದೇಶಗಳಿಗೆ ಅನುರೂಪ ಧ್ಯೇಯೋದ್ದೇಶಗಳನ್ನು ಹೊಂದಿರುವ ಯಾವುದೇ ದಾನಸಂಸ್ಥೆ, ಸಂಸ್ಥೆ ಅಥವಾ ಸಂಘಕ್ಕೆ ವರ್ಗಾವಣೆ ಮಾಡತಕ್ಕದ್ದು.




# ಅಕಾದೆಮಿಯ ವಾರ್ಷಿಕ ಸಮ್ಮೇಳನ

1987 ಮೇ ತಿಂಗಳಿನಲ್ಲಿ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನವು ಬೆಂಗಳೂರಿನಲ್ಲಿ ನಡೆಯಲಿದೆ. ತಾರೀಖುಗಳನ್ನು ಏಪ್ರಿಲ್ ತಿಂಗಳಿನಲ್ಲಿ ಖಚಿತಪಡಿಸಲಾಗುವುದು. ಸದಸ್ಯರಾದವರು ಪ್ರತಿನಿಧಿಗಳಾಗಿ ಬಂದು ಕರ್ನಾಟಕದ ಇತಿಹಾಸದ ಬಗೆಗೆ ಯಾವುದೇ ಸಂಶೋಧನಾತ್ಮಕ ಪ್ರಬಂಧವನ್ನು ಕನ್ನಡದಲ್ಲಿ ಓದಬಹುದು. ಓದಬೇಕಾದ ಪ್ರಬಂಧದ ಒಂದು ಪ್ರತಿಯನ್ನು ಏಪ್ರಿಲ್ 30ಕ್ಕೆ ಮೊದಲು ಪ್ರಧಾನ ಕಾರ್ಯದರ್ಶಿಗಳಿಗೆ ಕಳುಹಿಸಿ ಕೊಡಬೇಕು.

ಸಮ್ಮೇಳನದ ಕಾಲಕ್ಕೆ ಪ್ರಕಟವಾಗುವ 'ಇತಿಹಾಸ ದರ್ಶನ'ದ ವಿಶೇಷಾಂಕಕ್ಕೆ ಮಾರ್ಚ್ 15ಕ್ಕೆ ಮೊದಲು ಲೇಖನಗಳನ್ನು ಕಳುಹಿಸಬಹುದು. ಈ ಲೇಖನದ ಒಂದು ಇಂಗ್ಲಿಷ್ ಸಾರಾಂಶವನ್ನು ಲೇಖನವು ಒಳಗೊಂಡಿರಬೇಕು.

ಪದವಿಪೂರ್ವ ಪರೀಕ್ಷೆಯ ಮೌಲ್ಯಮಾಪನ ಮುಗಿದ ತಕ್ಷಣ ಸಮ್ಮೇಳನವನ್ನು ಏರ್ಪಡಿಸಲಾಗುವುದು. ನಿಮ್ಮ ಸ್ನೇಹಿತರನ್ನೂ ಸದಸ್ಯರಾಗಿ ನೋಂದಾಯಿಸಿ ಸಮ್ಮೇಳನಕ್ಕೆ ಕರೆದು ತನ್ನಿ.

ಪ್ರತಿನಿಧಿ ಶುಲ್ಕ : ರೂ. 50 (ವಸತಿ ಸಹಿತ), ರೂ. 25 (ವಸತಿ ರಹಿತ). ಅಧಿಕ ಮಾಹಿತಿಗೆ ಇವರಿಗೆ ಬರೆಯಬಹುದು : ಪ್ರಧಾನ ಕಾರ್ಯದರ್ಶಿ, ಕರ್ನಾಟಕ ಇತಿಹಾಸ ಅಕಾದೆಮಿ, 'ರಂಗನಾಥ ನಿಲಯ', ಸಂಖ್ಯೆ 13 (ಹಳೆಯ ಸಂಖ್ಯೆ 4), 15ನೆಯ ತಿರುವು, ನೂತನ ದೇವಾಲಯದ ರಸ್ತೆ, ಮಲ್ಲೇಶ್ವರಂ, ಬೆಂಗಳೂರು 560 003.

# ಕರ್ನಾಟಕ ಇತಿಹಾಸ ಅಕಾದೆಮಿ ಬೆಂಗಳೂರು

## ವರದಿ

ದಿನಾಂಕ 28-6-86 ರಿಂದ 14-12-86ರ ವರೆಗಿನ ಕರ್ನಾಟಕ ಇತಿಹಾಸ ಅಕಾದೆಮಿಯ ಕಾರ್ಯ ಚಟುವಟಿಕೆಗಳ ಸ್ಥೂಲ ಪರಿಚಯ ಇಂತಿದೆ :

ಕರ್ನಾಟಕ ಚರಿತ್ರೆ ಮತ್ತು ಸಂಸ್ಕೃತಿಯ ಸಮಗ್ರ ಅಧ್ಯಯನಕ್ಕೆ ಪ್ರತಿಷ್ಠಿತ ಸಂಸ್ಥೆಯೊಂದರ ಅಗತ್ಯ ತೀವ್ರವಾಗಿರುವುದನ್ನು ಅರಿತು ಚರಿತ್ರೆ ಮತ್ತು ಪೂರಕ ವಿಷಯಗಳ ಸಂಶೋಧನೆಯಲ್ಲಿ, ಅಧ್ಯಯನದಲ್ಲಿ ನಿರತರಾಗಿರುವ ಕೆಲವು ಆಸಕ್ತರು ಡಾ॥ ಸೂರ್ಯನಾಥ ಯು. ಕಾಮತ್ ಅವರ ಮಾರ್ಗದರ್ಶನದಲ್ಲಿ, ದಿನಾಂಕ 28-6-86ರಂದು ಬೆಂಗಳೂರಿನ ಮಿಥಿಕ್ ಸೊಸಾಯಿಟಿಯಲ್ಲಿ ಸಭೆ ಸೇರಿ, ಇಂತಹ ಸಂಸ್ಥೆಯೊಂದನ್ನು ಹುಟ್ಟು ಹಾಕಲು ನಿರ್ಧರಿಸಿದರು. ಸಭಿಕರ ಪ್ರಾರ್ಥನೆಯ ಮೇರೆಗೆ ಅಂದಿನ ಸಭೆಯ ಅಧ್ಯಕ್ಷತೆಯನ್ನು ಮೈಸೂರಿನ ಡಾ॥ ಎಂ. ವಿ. ಶ್ರೀನಿವಾಸ್ ಅವರು ವಹಿಸಿದ್ದರು. ಸಂಸ್ಥೆಯ ಸ್ಥಾಪನೆ, ಅದರ ಉದ್ದೇಶ, ಕಾರ್ಯಕ್ರಮ ಇತ್ಯಾದಿಗಳ ಬಗೆಗೆ ಸಭೆಯಲ್ಲಿ ದೀರ್ಘ ಚರ್ಚೆ ನಡೆದು, ಶ್ರೀ ಕೆ. ಜಿ. ನಾಗರಾಜನ್ ಮತ್ತು ಡಾ॥ ಸೂರ್ಯನಾಥ ಕಾಮತ್ ಅವರುಗಳ ಸಂಯುಕ್ತ ಸೂಚನೆಯನ್ನು ಅಂಗೀಕರಿಸಿ, ಈ ಸಂಸ್ಥೆಯನ್ನು 'ಕರ್ನಾಟಕ ಇತಿಹಾಸ ಅಕಾದೆಮಿ' ಎಂಬ ಹೆಸರಿನಿಂದ ಕರೆಯಲು ನಿರ್ಣಯ ಕೈಗೊಂಡಿತು. ಸಂಶೋಧನ ಲೇಖನಗಳ ಪ್ರಕಟಣೆಗೆ ಅವಕಾಶ ಮಾಡಿ ಕೊಡುವಂತಹ ನಿಯತ ಕಾಲಿಕವನ್ನು ಅಕಾದೆಮಿಯ ವತಿಯಿಂದ ಹೊರತರಬೇಕೆನ್ನುವುದನ್ನೂ ಸಭೆ ನಿರ್ಣಯದ ಮೂಲಕ ಅಂಗೀಕರಿಸಿತು. ಸಭೆಯು ಈ ಕೆಳಕಂಡ 12 ಮಂದಿಯನ್ನು ಕಾರ್ಯಕಾರಿ ಸಮಿತಿಗೆ ಆಯ್ಕೆ ಮಾಡಿತು :

| | | |
|---|---|---|
| ಅಧ್ಯಕ್ಷರು | : | ಡಾ॥ ಎಂ. ವಿ. ಶ್ರೀನಿವಾಸ್ |
| ಉಪಾಧ್ಯಕ್ಷರು | : | ಶ್ರೀ ಎಂ. ಜಿ. ನಾಗರಾಜ್ |
| ಕಾರ್ಯದರ್ಶಿಗಳು | : | ಶ್ರೀ ಲಕ್ಷ್ಮಣ್ ತೆಲಗಾವಿ ಮತ್ತು ಶ್ರೀ ಕೆ. ಆರ್. ಗಣೇಶ |
| ಕೋಶಾಧಿಕಾರಿ | : | ಶ್ರೀ ಎಸ್. ಎ. ಜಗನ್ನಾಥ್ |
| ಸದಸ್ಯರು | : | ಡಾ॥ ಸೂರ್ಯನಾಥ ಯು. ಕಾಮತ್ |
| | | ಶ್ರೀಮತಿ ಸಿ. ಎಸ್. ಶ್ಯಾಮಲಾಂಬಿಕಾ |
| | | ಶ್ರೀಮತಿ ಕಮಲ ಸಂಪಳ್ಳಿ |
| | | ಶ್ರೀ ಹೆಚ್. ಎಮ್. ಸಿದ್ಧನಗೌಡರ |
| | | ಶ್ರೀ ಎಚ್. ಎಸ್. ಗೋಪಾಲರಾಯ |
| | | ಶ್ರೀ ಎಚ್. ಪಿ. ಶಶಿಧರಮೂರ್ತಿ |
| | | ಶ್ರೀ ಕೆ. ಜಿ. ನಾಗರಾಜನ್ |

**ಕಾರ್ಯಕ್ರಮಗಳು :** ಅಕಾದೆಮಿಯು ತನ್ನ ಉದ್ದೇಶಗಳಿಗೆ ಅನುಸಾರವಾಗಿ ಈ ಕೆಳಕಂಡಂತೆ ಮಾಸಿಕ ಉಪನ್ಯಾಸ ಕಾರ್ಯಕ್ರಮಗಳನ್ನು ಬೆಂಗಳೂರಿನ ವಿವಿಧ ಪ್ರದೇಶಗಳಲ್ಲಿ ಏರ್ಪಡಿಸಿ, ಸಾರ್ವಜನಿಕರಲ್ಲಿ ಇತಿಹಾಸ ಕುರಿತು ಆಸಕ್ತಿ ಬೆಳೆಸಿಕೊಳ್ಳುವಂತೆ ಮಾಡಲು ಯತ್ನಿಸಿದೆ :

ದಿನಾಂಕ 26-7-86ರಂದು ಮಲ್ಲೇಶ್ವರಂನ ಗಾಂಧಿ ಸಾಹಿತ್ಯ ಸಂಘದಲ್ಲಿ ಡಾ॥ ಜಿ. ಎಸ್. ದೀಕ್ಷಿತ್ ಅವರು 'ಇತಿಹಾಸ ಸಂಶೋಧನೆಯ ವಿಧಾನಗಳು' ಎಂಬ ವಿಷಯ ಕುರಿತು ಉಪನ್ಯಾಸ ಮಾಡಿದರು. ಅಕಾದೆಮಿಯ ಉಪಾಧ್ಯಕ್ಷ ಶ್ರೀ ಎಂ. ಜಿ. ನಾಗರಾಜ್ ಅವರು ಅಧ್ಯಕ್ಷತೆ ವಹಿಸಿದ್ದರು.

ದಿನಾಂಕ 30-8-86ರಂದು ವೆಂಕಟಪ್ಪ ಕಲಾಶಾಲೆಯಲ್ಲಿ ಡಾ॥ ಎಂ. ಚಿದಾನಂದಮೂರ್ತಿ ಅವರು 'ಕಲ್ಯ : ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ವಿಷಯ ಕುರಿತು ಉಪನ್ಯಾಸ ಮಾಡಿದರು. ಶ್ರೀ ಎಂ. ಜಿ. ನಾಗರಾಜ್ ಅವರು ಅಧ್ಯಕ್ಷತೆ ವಹಿಸಿದ್ದರು.

ದಿನಾಂಕ 27-9-86ರಂದು ವೆಂಕಟಪ್ಪ ಕಲಾಶಾಲೆಯಲ್ಲಿಯೇ ಡಾ॥ ಸೂರ್ಯನಾಥ ಕಾಮತ್ ಅವರು 'ಸಸ್ಯಮೂಲದ ಸ್ಥಳನಾಮಗಳು' ಎಂಬ ವಿಷಯ ಕುರಿತು ಉಪನ್ಯಾಸ ಮಾಡಿದರು. ಡಾ॥ ಎಂ. ಚಿದಾನಂದ ಮೂರ್ತಿ ಅವರು ಅಧ್ಯಕ್ಷತೆ ವಹಿಸಿದ್ದರು.

ದಿನಾಂಕ 29-11-86ರಂದು ಬಸವನಗುಡಿಯ ಬಿ. ಎಂ ಎಸ್. ಮಹಿಳೆಯರ ಕಾಲೇಜಿನ ಹಳೆಯ ಕಟ್ಟಡದಲ್ಲಿ ಡಾ॥ ಎಸ್. ವಿ. ದೇಶಿಕಾಚಾರ್ ಅವರು 'ಐತಿಹಾಸಿಕ ಕಾಗದದ ದಾಖಲೆಗಳು' ಎಂಬ ವಿಷಯ ಕುರಿತು ಉಪನ್ಯಾಸ ಮಾಡಿದರು. ಅಕಾದೆಮಿಯ ನೂತನ ಅಧ್ಯಕ್ಷ ಡಾ॥ ಜಿ. ಎಸ್. ದೀಕ್ಷಿತ್ ಅವರು ಅಧ್ಯಕ್ಷತೆ ವಹಿಸಿದ್ದರು.

**ನಿಬಂಧನೆ :** ದಿನಾಂಕ 26-7-86ರಂದು ಸೇರಿದ್ದ ಅಕಾದೆಮಿಯ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಅಕಾದೆಮಿಯ ನಿಬಂಧನೆಯನ್ನು ರೂಪಿಸಿಕೊಡುವ ಜವಾಬ್ದಾರಿಯನ್ನು ಶ್ರೀ ಕೆ. ಜಿ. ನಾಗರಾಜನ್ ಅವರಿಗೆ ವಹಿಸಿಕೊಡುವ ನಿರ್ಣಯವನ್ನು ಕೈಗೊಳ್ಳಲಾಯಿತು.

ದಿನಾಂಕ 18-10-86ರಂದು ಸೇರಿದ ಎರಡನೆಯ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಶ್ರೀ ನಾಗರಾಜನ್ ಅವರು ಸಿದ್ಧಪಡಿಸಿಕೊಟ್ಟ ಅಕಾದೆಮಿಯ ನಿಬಂಧನೆಗಳ ಕರಡುಪ್ರತಿಯನ್ನು ಪರಿಶೀಲಿಸಿ ಹಾಗೂ ಚರ್ಚಿಸಿ ತಿದ್ದುಪಡಿಯೊಡನೆ ಅದಕ್ಕೆ ಅಂತಿಮ ರೂಪ ಕೊಡಲಾಯಿತು.

ದಿನಾಂಕ 25-10-86ರಂದು ಸೇರಿದ್ದ ಮೂರನೆಯ ಕಾರ್ಯಕಾರಿ ಸಮಿತಿ ಸಭೆಯಲ್ಲಿ ನಿಬಂಧನೆಯ ಕರಡನ್ನು ಓದಿ ತಿದ್ದುಪಡಿಯೊಡನೆ ಅದನ್ನು ಒಪ್ಪಲಾಯಿತು. ಅದನ್ನು ಸ್ಟೆನ್ಸಿಲ್ ಮಾಡಿಸಿ ಅಕಾದೆಮಿಯ ಎಲ್ಲ ಸದಸ್ಯರಿಗೂ ಪರಿಶೀಲನೆಗಾಗಿ ಮುಂಚಿತವಾಗಿಯೇ ಕಳುಹಿಸಲು ನಿರ್ಧರಿಸಲಾಯಿತು. ನಿಬಂಧನೆಯನ್ನು ರೂಪಿಸಿಕೊಟ್ಟ ಶ್ರೀ ನಾಗರಾಜನ್ ಅವರಿಗೆ ಕೃತಜ್ಞತೆ ಸಲ್ಲಿಸುವ ನಿರ್ಣಯವನ್ನು ಕೈಗೊಳ್ಳಲಾಯಿತು.

ದಿನಾಂಕ 23-11-86ರಂದು ಮಿಥಿಕ್ ಸೊಸಾಯಿಟಿಯಲ್ಲಿ ಕರೆದಿದ್ದ ಅಕಾದೆಮಿಯ ಸಕಲ ಸದಸ್ಯರ ಮೊದಲನೆಯ ಸಭೆಯಲ್ಲಿ ನಿಬಂಧನೆಯ ಕರಡನ್ನು ಮಂಡಿಸಿ, ಕೆಲವು ತಿದ್ದುಪಡಿಗಳೊಡನೆ ಅಂತಿಮವಾಗಿ ಅಂಗೀಕರಿಸಲಾಯಿತು. ಈಗ ಈ ನಿಬಂಧನೆಯನ್ನು ನೋಂದಾಯಿಸಲು ಕ್ರಮ ಕೈಗೊಳ್ಳಲಾಗಿದೆ.

**ಲಾಂಛನ :** ದಿನಾಂಕ 26-7-86ರಂದು ಕಾರ್ಯಕಾರಿ ಸಮಿತಿ ಸಭೆಯಲ್ಲಿ ಅಕಾದೆಮಿಗೆ ಅಗತ್ಯವಿರುವ ಲಾಂಛನವನ್ನು ಪರಿಣತರ ಸಲಹೆಯ ಮೇರೆಗೆ ರೂಪಿಸಿ ಕೊಡುವಂತೆ ಸದಸ್ಯರಾದ ಶ್ರೀ ಅ. ಲ. ನರಸಿಂಹನ್ ಅವರನ್ನು ಪ್ರಾರ್ಥಿಸಲಾಯಿತು.

ದಿನಾಂಕ 23-11-86ರಂದು ಸಮಾವೇಶಗೊಂಡಿದ್ದ ಅಕಾದೆಮಿಯ ಸಕಲಸದಸ್ಯರ ಸಭೆಯಲ್ಲಿ ಲಾಂಛನದ ರೇಖಾಚಿತ್ರವನ್ನು ಮಂಡಿಸಿ ಒಪ್ಪಿಗೆ ಪಡೆಯಲಾಯಿತು; ಶ್ರೀ ನರಸಿಂಹನ್ ಅವರಿಗೆ ಕೃತಜ್ಞತೆ ಸಲ್ಲಿಸುವ ನಿರ್ಣಯವನ್ನು ಕೈಗೊಳ್ಳಲಾಯಿತು.

**ನಿಯತಕಾಲಿಕೆ :** ದಿನಾಂಕ 26-7-86ರ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಅಕಾದೆಮಿಯ ನಿಯತಕಾಲಿಕವನ್ನು 'ಇತಿಹಾಸ ದರ್ಶನ' ಎಂದು ಕರೆಯಬೇಕೆಂದೂ ಆ ಸಂಚಿಕೆಯನ್ನು ಸದಸ್ಯರುಗಳಾದ ಡಾ॥ ಸೂರ್ಯನಾಥ ಕಾಮತ್ ಮತ್ತು ಶ್ರೀ ಲಕ್ಷ್ಮಣ್ ತೆಲಗಾವಿ ಅವರುಗಳು ಸಂಯುಕ್ತವಾಗಿ ಸಂಪಾದಿಸಿ ಕೊಡಬೇಕೆಂದೂ ತೀರ್ಮಾನಿಸಲಾಯಿತು.

**ನೂತನ ಕಾರ್ಯಕಾರಿ ಸಮಿತಿ ;** ದಿನಾಂಕ 23-11-86ರಂದು ಸಮಾವೇಶಗೊಂಡಿದ್ದ ಅಕಾದೆಮಿಯ ಸಕಲಸದಸ್ಯರ ಸಭೆಯ ನೂತನ ಕಾರ್ಯಕಾರಿ ಸಮಿತಿಗೆ ಈ ಕೆಳಕಂಡವರನ್ನು ಒಮ್ಮತದಿಂದ ಆಯ್ಕೆ ಮಾಡಿದ್ದು, ಅಂದೇ ಸಭೆ ಸೇರಿದ್ದ ನೂತನ ಕಾರ್ಯಕಾರಿ ಸಮಿತಿಯು ನಿಯಮಾನುಸಾರವಾಗಿ ತನ್ನಲ್ಲೇ ಪದಾಧಿಕಾರಿಗಳನ್ನು ಆಯ್ಕೆ ಮಾಡಿತು. ನೂತನ ಕಾರ್ಯಕಾರಿ ಸಮಿತಿಯ ಪದಾಧಿಕಾರಿಗಳು ಮತ್ತು ಸದಸ್ಯರ ಹೆಸರುಗಳು ಈ ಕೆಳಕಂಡತಿವೆ :

ಡಾ॥ ಜಿ. ಎಸ್. ದೀಕ್ಷಿತ್, ಬೆಂಗಳೂರು (ಅಧ್ಯಕ್ಷರು), ಡಾ॥ ಕೆ. ಆರ್. ಬಸವರಾಜ್, ಧಾರವಾಡ ಮತ್ತು ಎಂ. ಜಿ. ನಾಗರಾಜ್, ಬೆಂಗಳೂರು ಜಿಲ್ಲೆ (ಉಪಾಧ್ಯಕ್ಷರುಗಳು), ಲಕ್ಷ್ಮಣ್ ತೆಲಗಾವಿ, ಬೆಂಗಳೂರು (ಪ್ರಧಾನ ಕಾರ್ಯದರ್ಶಿ), ಎಚ್. ಎಸ್. ಗೋಪಾಲರಾಯ ಮತ್ತು ಪ್ರೊ॥ ಆರ್. ಪರಿಮಳ, ಬೆಂಗಳೂರು (ಕಾರ್ಯದರ್ಶಿಗಳು), ಕೆ. ಆರ್. ಗಣೇಶ, ಬೆಂಗಳೂರು (ಕೋಶಾಧಿಕಾರಿ), ಡಾ॥ ಸೂರ್ಯನಾಥ ಯು. ಕಾಮತ್, ಬೆಂಗಳೂರು, ಡಾ॥ ಅ. ಸುಂದರ, ಡಾ॥ ಎ. ವಿ. ನರಸಿಂಹಮೂರ್ತಿ, ಮೈಸೂರು, ಡಾ॥ (ಶ್ರೀಮತಿ) ಚೂಡಾಮಣಿ ನಂದಗೋಪಾಲ್, ಮಂಗಳೂರು, ಎಚ್. ಪಿ. ಶಶಿಧರಮೂರ್ತಿ, ಮೈಸೂರು, ಎಚ್. ಶ್ರೀಶೈಲ ಆರಾಧ್ಯ, ಚಿತ್ರದುರ್ಗ, ಕಮಲ ಸಂಪಳ್ಳಿ, ಕೆ. ಜಿ. ನಾಗರಾಜನ್, ಹೆಚ್. ಎಂ. ಸಿದ್ಧನಗೌಡರ, ಎಸ್. ಎ. ಜಗನ್ನಾಥ್, ಬೆಂಗಳೂರು ಹಾಗೂ ಡಾ॥ ಕೆ. ಜಿ. ವಸಂತಮಾಧವ, ಮೂಲ್ಕಿ–ದಕ್ಷಿಣಕನ್ನಡ (ಸದಸ್ಯರುಗಳು).

**ಅಕಾದೆಮಿಯ ಉದ್ಘಾಟನೆ ಮತ್ತು ನಿಯತಕಾಲಿಕೆಯ ಬಿಡುಗಡೆ :** ದಿನಾಂಕ 14-12-86ರಂದು ಬೆಳಗ್ಗೆ ಬೆಂಗಳೂರಿನ ರಾಜ್ಯ ಯುವಕ ಕೇಂದ್ರದ ಯುವಜನ ಸೇವಾ ಮತ್ತು ಕ್ರೀಡಾ ನಿರ್ದೇಶನಾಲಯದ ಸಭಾಂಗಣದಲ್ಲಿ, ಕರ್ನಾಟಕ ಸರ್ಕಾರದ ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ನಗರಾಭಿವೃದ್ಧಿ ಸಚಿವರಾದ ಪ್ರೊ॥ ಎ. ಲಕ್ಷ್ಮೀಸಾಗರ್ ಅವರು ಅಕಾದೆಮಿಯ ಔಪಚಾರಿಕ ಉದ್ಘಾಟನೆಯನ್ನು ನೆರವೇರಿಸಿದರು. ಡಾ॥ ಎಂ. ಚಿದಾನಂದಮೂರ್ತಿ ಅವರು 'ಇತಿಹಾಸ ದರ್ಶನ' ನಿಯತಕಾಲಿಕೆಯನ್ನು ಬಿಡುಗಡೆ ಮಾಡಿದರು. ಅಕಾದೆಮಿಯ ಉದ್ದೇಶ, ಚಟುವಟಿಕೆ, ಯೋಜನೆ, ಇತ್ಯಾದಿಗಳನ್ನು ಡಾ॥ ಸೂರ್ಯನಾಥ ಕಾಮತ್ ಅವರು ಸಭೆಗೆ ಪರಿಚಯಿಸಿದರು. ಅಕಾದೆಮಿಯ ಅಧ್ಯಕ್ಷ ಡಾ॥ ಜಿ. ಎಸ್. ದೀಕ್ಷಿತ್ ಅವರು ಸಭಾಧ್ಯಕ್ಷತೆ ವಹಿಸಿದ್ದು, ಈ ಕಾರ್ಯಕ್ರಮದಲ್ಲಿ ಕರ್ನಾಟಕದ ನಾನಾ ಕಡೆಗಳಿಂದ ಬಂದಿದ್ದ ಸದಸ್ಯರು, ವಿದ್ವಾಂಸರು ಭಾಗವಹಿಸಿದ್ದರು.